## ಕರ್ನಾಟಕ ಸರ್ಕಾರ

ಸಂಖ್ಯೆ: ಇಎನ್ 203 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:07.12.2020

ಇವರಿಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಇಂಧನ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

Sr.
1
8/12/2020

ಮಾನ್ಯರೇ,

ವಿಷಯ: ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ನರೇಂದ್ರ .ಆರ್ (ಹನೂರು) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 325 ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ನರೇಂದ್ರ .ಆರ್ (ಹನೂರು) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 325 ಕ್ಕೆ ಉತ್ತರಗಳನ್ನು (ಕನ್ನಡ ಭಾಷೆ 350 ಪ್ರತಿಗಳು ಮತ್ತು ಆಂಗ್ಲ ಭಾಷೆ 25 ಪ್ರತಿಗಳು) ಲಗತ್ತಿಸಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

7/12

(ಶಾಂತಕುಮಾರ)
ಶಾಖಾಧಿಕಾರಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 325 |
| ಸದಸ್ಯರ ಹೆಸರು | : | ಶ್ರೀ ನರೇಂದ್ರ .ಆರ್. (ಹನೂರು) |
| ಉತ್ತರಿಸಬೇಕಾದ ದಿನಾಂಕ | : | 08.12.2020 |

*******

| ಪ್ರಶ್ನೆ | | ಉತ್ತರ |
|---|---|---|
| ಅ) | ಚಾಮರಾಜನಗರ ಜಿಲ್ಲೆಯ ಹನೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವಂತಹ ರೈತರ ಜಮೀನುಗಳಲ್ಲಿನ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಒದಗಿಸಲು ಅಳವಡಿಸಿರುವ ಟಿ.ಸಿ.ಗಳು ದುರಸ್ತಿಗೊಂಡ ಸಂದರ್ಭಗಳಲ್ಲಿ ಹೊಸ ಟಿ.ಸಿ.ಗಳನ್ನು ಅಳವಡಿಸಲು ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗದ (KERC) ನಿಯಮಾನುಸಾರ ಗ್ರಾಮಾಂತರ ಪ್ರದೇಶದಲ್ಲಿ ರೈತರ ನೀರಾವರಿ ಪಂಪ್‌ಸೆಟ್‌ನ ವಿಫಲಗೊಂಡ ಪರಿವರ್ತಕಗಳನ್ನು 72 ಗಂಟೆಯೊಳಗೆ ಬದಲಾಯಿಸಬೇಕಾಗಿರುತ್ತದೆ.<br>ಹನೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿರುವ ರೈತರ ಜಮೀನುಗಳಲ್ಲಿನ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಒದಗಿಸಲು ಅಳವಡಿಸಿರುವ ಪರಿವರ್ತಕಗಳು (ಟಿ.ಸಿ.ಗಳು) ದುರುಸ್ತಿಗೊಂಡ ಸಂದರ್ಭಗಳಲ್ಲಿ ವಿಫಲವಾದ ಪರಿವರ್ತಕಗಳನ್ನು 72 ಗಂಟೆಗಳಲ್ಲಿ ಬದಲಾಯಿಸಲು ಎಲ್ಲಾ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>ಹನೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪ್ರಸಕ್ತ ಸಾಲಿನ ನವೆಂಬರ್–2020ರ ಅಂತ್ಯಕ್ಕೆ ವಿವಿಧ ಸಾಮರ್ಥ್ಯದ ಒಟ್ಟು 218 ಸಂಖ್ಯೆಯ ಪರಿವರ್ತಕಗಳು ವಿಫಲಗೊಂಡಿದ್ದು, ಇವುಗಳನ್ನು ಈಗಾಗಲೇ ಬದಲಾಯಿಸಲಾಗಿರುತ್ತದೆ. ವಿಫಲಗೊಂಡ ಪರಿವರ್ತಕಗಳನ್ನು ಬದಲಾಯಿಸುವುದು ಒಂದು ನಿರಂತರ ಪ್ರಕ್ರಿಯೆಯಾಗಿರುತ್ತದೆ.<br>ವಿಫಲವಾದ ಪರಿವರ್ತಕಗಳನ್ನು ನಿಗದಿತ ಕಾಲಮಿತಿಯೊಳಗೆ ಬದಲಾಯಿಸಲು ಅನುವಾಗುವಂತೆ ಕೊಳ್ಳೇಗಾಲ ಹಾಗೂ ಹನೂರು ಉಪವಿಭಾಗ ಮಟ್ಟದಲ್ಲಿ ಪ್ರತ್ಯೇಕ ಪರಿವರ್ತಕ ದುರಸ್ತಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿರುತ್ತವೆ.<br>ಕೊಳ್ಳೇಗಾಲ ವಿಭಾಗೀಯ ಉಗ್ರಾಣದಲ್ಲಿ ನವೆಂಬರ್–2020ರ ಅಂತ್ಯಕ್ಕೆ ಒಟ್ಟು 56 ಸಂಖ್ಯೆಯ ವಿವಿಧ ಸಾಮರ್ಥ್ಯದ ಪರಿವರ್ತಕಗಳು ದಾಸ್ತಾನಿನಲ್ಲಿರುತ್ತವೆ. |
| ಆ) | ಬಂದಿದ್ದಲ್ಲಿ, ಶೀಘ್ರವಾಗಿ ಹೊಸ ಟಿ.ಸಿ. ಗಳನ್ನು ಅಳವಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ವಿವರ ನೀಡುವುದು) | |

ಸಂಖ್ಯೆ: ಎನರ್ಜಿ 203 ಪಿಪಿಎಂ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ಸಂಖ್ಯೆ: ಸನೀಇ 214 LAQ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, 2ನೇ ಮಹಡಿ,
ಬೆಂಗಳೂರು, ದಿನಾಂಕ:07.12.2020

**ಇವರಿಂದ**
ಸರ್ಕಾರದ ಕಾರ್ಯದರ್ಶಿ,
ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ
ವಿಕಾಸ ಸೌಧ, ಬೆಂಗಳೂರು

**ಇವರಿಗೆ**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನ ಸೌಧ,
ಬೆಂಗಳೂರು.

5102
② 8/12/2020

8/12/2020

ಮಾನ್ಯರೆ,

ವಿಷಯ:- ಶ್ರೀ ವೆಂಕಟರಮಣಯ್ಯ ಟಿ., ಮಾನ್ಯ ವಿಧಾನಸಭೆ ಸದಸ್ಯರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:296ಕ್ಕೆ ಉತ್ತರಿಸುವ ಬಗ್ಗೆ

* * * *

ಮೇಲ್ಕಂಡ ವಿಷಯಕ್ಕೆ ಸಂಬಂಧಪಟ್ಟಂತೆ, ಶ್ರೀ ವೆಂಕಟರಮಣಯ್ಯ ಟಿ., ಮಾನ್ಯ ವಿಧಾನಸಭೆ ಸದಸ್ಯರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:296ರ ಉತ್ತರದ 250 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ. ಮುಂದಿನ ಸೂಕ್ತ ಕ್ರಮ ಕೈಗೊಳ್ಳಲು ಈ ಮೂಲಕ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

(ಎಂ.ಎಸ್.ಜ್ಯೋತಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 296
2. ಸದಸ್ಯರ ಹೆಸರು : ಶ್ರೀ ವೆಂಕಟರಮಣಯ್ಯ ಟಿ.,
3. ಉತ್ತರಿಸಬೇಕಾದ ದಿನಾಂಕ : 08.12.2020
4. ಉತ್ತರಿಸುವ ಸಚಿವರು : ಮಾನ್ಯ ಸಣ್ಣ ನೀರಾವರಿ ಸಚಿವರು.

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ದೊಡ್ಡಬಳ್ಳಾಪುರ ತಾಲ್ಲೂಕಿನ ಕೆರೆಗಳಿಗೆ ವೃಷಭಾವತಿ ನದಿಯಿಂದ ಸಂಸ್ಕರಿಸಿದ ತ್ಯಾಜ್ಯ ನೀರನ್ನು ಏತ ನೀರಾವರಿ ಯೋಜನೆ ಮೂಲಕ ನೀರನ್ನು ತುಂಬಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಬಂದಿದೆ. |
| ಆ | ಹಾಗಿದ್ದಲ್ಲಿ, ಸದರಿ ಯೋಜನೆಯ ಕಾಮಗಾರಿಯನ್ನು ಸರ್ಕಾರವು ಯಾವಾಗ ಪ್ರಾರಂಭಿಸುವುದು? | ಅನುದಾನದ ಲಭ್ಯತೆಯನ್ನಾಧರಿಸಿ ಕಾಮಗಾರಿಯನ್ನು ಕೈಗೊಳ್ಳುವ ಕುರಿತು ಪರಿಶೀಲಿಸಲಾಗುವುದು. |

ಕಡತ ಸಂಖ್ಯೆ: MID 214 LAQ 2020

(ಜೆ.ಸಿ.ಮಾಧುಸ್ವಾಮಿ)
ಕಾನೂನು, ಸಂಸದೀಯ ವ್ಯವಹಾರಗಳು ಮತ್ತು
ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

ವೃಷಭಾವತಿ ವ್ಯಾಲಿ ಯೋಜನೆಯಿಂದ ತುಂಬಿಸಲು ಯೋಜಿಸಿರುವ ಕೆರೆಗಳ ವಿವರ

ಶ್ರೀ ವೆಂಕಟರಮಣಯ್ಯ ಟಿ., ಮಾನ್ಯ ವಿಧಾನಸಭೆ ಸದಸ್ಯರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:296ಕ್ಕೆ ಅನುಬಂಧ

| ಕ್ರ.ಸಂ. | ಕೆರೆಯ ಹೆಸರು | ತಾಲ್ಲೂಕು | ಕೆರೆಯ ಶೇಖರಣಾ ಸಾಮರ್ಥ್ಯ (ಎಂ.ಸಿ.ಎಫ್.ಟಿ. ಗಳಲ್ಲಿ) | ತುಂಬಿಸಲು ಯೋಜಿಸಿರುವ ಕೆರೆಯ ಸಾಮರ್ಥ್ಯ (ಎಂ.ಎಲ್.ಡಿ.ಗಳಲ್ಲಿ) |
|---|---|---|---|---|
| 1 | Kenjigadahalli Tank | DB Pura | 2.684 | 0.145 |
| 2 | Chikkavaddagere Tank | DB Pura | 5.333 | 0.288 |
| 3 | Honnavara Tank | DB Pura | 19.494 | 1.054 |
| 4 | Madure amanikere Tank | DB Pura | 285.769 | 15.449 |
| 5 | Shiresandra Tank | DB Pura | 49.158 | 2.658 |
| 6 | Kammasandra Tank-1 | DB Pura | 0.247 | 0.013 |
| 7 | Halenahalli Tank-2 | DB Pura | 2.437 | 0.132 |
| 8 | Doddavaddagere Tank | DB Pura | 10.700 | 0.579 |
| 9 | Halenahalli Tank-2 | DB Pura | 0.247 | 0.013 |
| 10 | Halenahlli Tank | DB Pura | 2.437 | 0.132 |
| 11 | Aambalagere Tank-1 | DB Pura | 1.059 | 0.057 |
| 12 | Gulya Tank-1 | DB Pura | 11.831 | 0.640 |
| 13 | Shimpadipura Tank | DB Pura | 16.174 | 0.874 |
| 14 | Gandragulipura Tank | DB Pura | 2.154 | 0.116 |
| 15 | Kasagatta Tank-1 | DB Pura | 0.565 | 0.031 |
| 16 | Kasagatta Tank-5 | DB Pura | 0.106 | 0.006 |
| 17 | Aambalagere Tank | DB Pura | 4.132 | 0.223 |
| 18 | J I Tharabanahalli Tank-1 | DB Pura | 2.190 | 0.119 |
| 19 | J I Tharabanahalli Tank | DB Pura | 0.071 | 0.004 |
| 20 | Kasagatta Tank | DB Pura | 17.940 | 0.969 |
| 21 | Dodda Hejjaji Tank | DB Pura | 33.726 | 1.824 |
| 22 | Kasaba Doddabelavangala Tank-1 | DB Pura | 85.604 | 4.627 |
| 23 | Muppadighatta Tank | DB Pura | 22.213 | 1.201 |
| 24 | Kattihosahalli Tank | DB Pura | 6.780 | 0.367 |
| 25 | Kasaba Doddabelavangala Tank-2 | DB Pura | 16.421 | 0.887 |
| 26 | Naranahalli Tank | DB Pura | 7.628 | 0.413 |
| 27 | Naranahalli Tank-1 | DB Pura | 0.742 | 0.040 |
| 28 | Kugonahalli Tank | DB Pura | 15.609 | 0.844 |
| 29 | Shravanur Tank | DB Pura | 1.660 | 0.090 |
| 30 | Chikkanahalli Tank-1 | DB Pura | 4.732 | 0.256 |
| 31 | Chikkanahalli Tank-2 | DB Pura | 3.708 | 0.200 |
| 32 | Shravanuru Tank | DB Pura | 6.039 | 0.326 |
| 33 | Hanabe Tank-1 | DB Pura | 17.269 | 0.934 |
| 34 | Kesturu Tank | DB Pura | 23.696 | 1.281 |

| ಕ್ರ.ಸಂ. | ಕೆರೆಯ ಹೆಸರು | ತಾಲ್ಲೂಕು | ಕೆರೆಯ ಶೇಖರಣಾ ಸಾಮರ್ಥ್ಯ (ಎಂ.ಸಿ.ಎಫ್.ಟಿ. ಗಳಲ್ಲಿ) | ತುಂಬಿಸಲು ಯೋಜಿಸಿರುವ ಕೆರೆಯ ಸಾಮರ್ಥ್ಯ (ಎಂ.ಎಲ್.ಡಿ.ಗಳಲ್ಲಿ) |
|---|---|---|---|---|
| 35 | Aralu Mallige Tank | DB Pura | 201.719 | 10.905 |
| 36 | Dodda Thumakuru Kere | DB Pura | 77.410 | 4.185 |
| 37 | Kalkolu Tank | DB Pura | 177.387 | 9.590 |
| 38 | BhaktarahalliTank | DB Pura | 5.862 | 0.317 |
| 39 | Rampura Kere-1 | DB Pura | 4.626 | 0.250 |
| 40 | Rampura Tank | DB Pura | 50.395 | 2.724 |
| 41 | Madeswara Tank | DB Pura | 1.271 | 0.069 |
| 42 | Lingapura Tank | DB Pura | 7.911 | 0.427 |
| 43 | Akkathammanahalli Tank | DB Pura | 17.269 | 0.934 |
| 44 | Bhuchanahalli Tank-1 | DB Pura | 1.342 | 0.072 |
| 45 | Buchanahalli Tank | DB Pura | 16.492 | 0.891 |
| 46 | Gollahalli tank | DB Pura | 12.078 | 0.653 |
| 47 | Madeshwara Tank-1 | DB Pura | 5.580 | 0.301 |
| 48 | Vanigarahalli Tank | DB Pura | 50.395 | 2.724 |
| 49 | Hanabe Tank | DB Pura | 70.277 | 3.799 |
| 50 | Galibilikote Tank | DB Pura | 1.872 | 0.101 |
| 51 | Bommanahalli Tank | DB Pura | 5.403 | 0.292 |
| 52 | Vanigarahalli Tank -1 | DB Pura | 25.674 | 1.388 |
| 53 | Rameshwara Tank | DB Pura | 6.215 | 0.336 |
| 54 | Hadhripura Tank | DB Pura | 35.174 | 1.902 |
| 55 | Chunchegowdanahosahalli Tank | DB Pura | 2.543 | 0.138 |
| 56 | Huskur Tank | DB Pura | 11.760 | 0.636 |
| 57 | Menasi Tank | DB Pura | 15.150 | 0.819 |
| 58 | Shiravara Tank | DB Pura | 11.089 | 0.599 |
| 59 | Thippuru Tank | DB Pura | 9.464 | 0.511 |
| 60 | Kamaluru Tank | DB Pura | 15.468 | 0.836 |
| 61 | Thapasihalli Tank | DB Pura | 26.839 | 1.451 |
| 62 | Madhagondanahalli Tank | DB Pura | 57.705 | 3.119 |
| 63 | Talagawara Tank | DB Pura | 51.948 | 2.808 |
| 64 | Gunjuru Tank (Kothnur Tank) | DB Pura | 138.717 | 7.498 |
| 65 | Somenahalli Tank | DB Pura | 61.625 | 3.332 |
| 66 | Gundmagere Tank | DB Pura | 7.204 | 0.389 |
| 67 | Makalikere | DB Pura | 2.578 | 0.140 |
| 68 | Hosahalli Tank-1 | DB Pura | 24.014 | 1.298 |
| 69 | Hosahalli Tank-2 | DB Pura | 3.143 | 0.170 |
| 70 | Ujjini Tank | DB Pura | 26.839 | 1.451 |
| 71 | Mallasandra Tank-1 | DB Pura | 0.247 | 0.013 |
| 72 | Mallasandra Tank-2 | DB Pura | 7.346 | 0.397 |
| 73 | Jakkenahalli Tank | DB Pura | 5.227 | 0.282 |
| 74 | Kallakuntane Tank | DB Pura | 3.779 | 0.204 |
| 75 | Arudi Tank -1 | DB Pura | 4.273 | 0.231 |
| 76 | Banavathi Tank-1 | DB Pura | 18.328 | 0.991 |
| 77 | Banavathi Tank-2 | DB Pura | 13.490 | 0.730 |
| 78 | Arudi Tank -2 | DB Pura | 51.101 | 2.762 |
| 79 | Mathur Tank | DB Pura | 0.600 | 0.032 |

| ಕ್ರ.ಸಂ. | ಕೆರೆಯ ಹೆಸರು | ತಾಲ್ಲೂಕು | ಕೆರೆಯ ಶೇಖರಣಾ ಸಾಮರ್ಥ್ಯ (ಎಂ.ಸಿ.ಎಫ್.ಟಿ. ಗಳಲ್ಲಿ) | ತುಂಬಿಸಲು ಯೋಜಿಸಿರುವ ಕೆರೆಯ ಸಾಮರ್ಥ್ಯ (ಎಂ.ಎಲ್.ಡಿ.ಗಳಲ್ಲಿ) |
|---|---|---|---|---|
| 80 | Thimmasandra Tank-1 | DB Pura | 0.636 | 0.034 |
| 81 | Thimmasandra Tank | DB Pura | 10.135 | 0.548 |
| 82 | Thogarigatta Tank | DB Pura | 2.401 | 0.129 |
| 83 | Medahalli tank | DB Pura | 2.966 | 0.160 |
| 84 | Mallatthahalli Tank | DB Pura | 48.593 | 2.627 |
| 85 | Karanala Tank | DB Pura | 3.108 | 0.167 |
| 86 | Lakshmidevipura Tank | DB Pura | 15.645 | 0.846 |
| 87 | Thirumagondanahalli Tank | DB Pura | 46.475 | 2.513 |
| 88 | Kuruvagere Tank | DB Pura | 11.583 | 0.626 |
| 89 | Kanchinganla Tank | DB Pura | 43.508 | 2.353 |
| 90 | Rajaghattadha Amanikere Tank | DB Pura | 65.615 | 3.547 |
| 91 | Shivapurada Amanikere Tank | DB Pura | 0.671 | 0.037 |
| 92 | Khas Bhag Kere Tank | DB Pura | 55.374 | 2.993 |
| 93 | Majara Hosahalli Tank | DB Pura | 27.193 | 1.470 |
| 94 | Karanala Kere-1 | DB Pura | 3.284 | 0.178 |
| 95 | Kasaba Thubagere Tank | DB Pura | 6.569 | 0.355 |
| 96 | Linganahalli Tank | DB Pura | 43.579 | 2.356 |
| 97 | Konagatta Tank | DB Pura | 51.595 | 2.789 |
| 98 | Gulayanandhigundhi Tank-1 | DB Pura | 6.357 | 0.344 |
| 99 | Thapashipura Tank | DB Pura | 3.284 | 0.178 |
| 100 | Doddarayanappanahalli Tank | DB Pura | 8.158 | 0.441 |
| 101 | Heggadihalli Tank | DB Pura | 2.790 | 0.151 |
| 102 | Melekote Tank | DB Pura | 17.834 | 0.963 |
| 103 | Gantiganahalli Kere | DB Pura | 22.284 | 1.204 |
| | | **Total** | **2,525.021** | **136.498** |

ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 200 ಬೆಂಭೂಸ್ವಾ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, 4ನೇ ಮಹಡಿ,
ಬೆಂಗಳೂರು, ದಿನಾಂಕ: 07.12.2020

ಇವರಿಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

3
8/12/2020

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಕೃಷ್ಣ ಭೈರೇಗೌಡ (ಬ್ಯಾಟರಾಯನಪುರ ವಿಧಾನಸಭಾ ಕ್ಷೇತ್ರ) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 354 ಕ್ಕೆ ಉತ್ತರವನ್ನು ಕಳುಹಿಸಿಕೊಡುವ ಬಗ್ಗೆ.

* * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಕೃಷ್ಣ ಭೈರೇಗೌಡ (ಬ್ಯಾಟರಾಯನಪುರ ವಿಧಾನಸಭಾ ಕ್ಷೇತ್ರ) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 354 ಕ್ಕೆ ಸಂಬಂಧಿಸಿದಂತೆ 350 ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಕೆ.ಎಸ್. ಜಗದೀಶರೆಡ್ಡಿ)
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

07/12

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 354 |
| ಸದಸ್ಯರ ಹೆಸರು | : | ಶ್ರೀ ಕೃಷ್ಣ ಭೈರೇಗೌಡ (ಬ್ಯಾಟರಾಯನಪುರ) |
| ಉತ್ತರಿಸಬೇಕಾದ ದಿನಾಂಕ | : | 08.12.2020 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿರವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಹೆಬ್ಬಾಳ ಮೇಲ್ಸೇತುವ ಕೆಳಗೆ ಎಷ್ಟು ಮತ್ತು ಯಾವ ಅಳತೆಯ ಹೋರ್ಡಿಂಗ್ ಗಳನ್ನು ಅಳವಡಿಸಲು ಖಾಸಗಿ ಸಂಸ್ಥೆಗೆ ಅನುಮತಿ ನೀಡಲಾಗಿದೆ: ಅನುಮತಿಯನ್ನು ಯಾವಾಗ ನೀಡಲಾಗಿದೆ; ಇದಕ್ಕೆ ಸಂಬಂಧಿಸಿದ ಕರಾರಿನ ವಿವರಗಳನ್ನು ನೀಡುವುದು: | ಒಟ್ಟಾರೆ 147 ಸಂಖ್ಯೆಯ ಜಾಹಿರಾತು ಫಲಕಗಳನ್ನು ಅಳವಡಿಸಲು ಅನುಮತಿಸಲಾಗಿದೆ. ಇವುಗಳ ಒಟ್ಟು ವಿಸ್ತೀರ್ಣ 61,780 ಚ.ಅಡಿಗಳಾಗಿದ್ದು, ಅದರ ವಿವರಗಳು ಈ ಕೆಳಕಂಡಂತಿವೆ :-<br><br>A) 35x5ಅಡಿ ಅಳತೆಯ ಗ್ಯಾಂಟ್ರೀ ಸೂಚನಾ ಫಲಕಗಳು, 4ನೇ ನಂಬರ್ (700 ಚ.ಅಡಿ)<br>B) ಕ್ರ್ಯಾಷ್ ಬ್ಯಾರಿಯರ್ ಗಳ ಮೇಲೆ ಅಳವಡಿಸಲು 40x12ಅಡಿ ಅಳತೆಯ ಪ್ರದರ್ಶನ ಫಲಕಗಳು, 29 ನಂಬರ್ (13920 ಚ.ಅಡಿ)<br>C) ವಿದ್ಯುತ್ ಕಂಬಗಳ ಹಿಂದೆ ಮುಂದೆ ಅಳವಡಿಸು ಪ್ರದರ್ಶನ ಫಲಕಗಳು 40 ನಂಬರ್ (960 ಚ.ಮೀ)<br>D) ಮೇಲುಸೇತುವೆ ಕೆಳಗಿನ ತೆರೆದ ಪ್ರದೇಶದಲ್ಲಿ ಅಳವಡಿಸು ಪ್ರದರ್ಶನ ಫಲಕಗಳು 15x10ಅಡಿ, 20 ನಂಬರ್ (3000 ಚ.ಅಡಿ)<br>E) ಮೇಲುಸೇತುವೆಯಿಂದ ವೀಕ್ಷಿಸುವ ಪ್ರದರ್ಶನ ಫಲಕಗಳು 40x20ಅಡಿ, 54 ನಂಬರ್ (43200 ಚ.ಅಡಿ)<br><br>ಈ ಕಾಮಗಾರಿಯನ್ನು ಮೆ\|\| ಅವಿನಾಶಿ ಆಡ್ಸ್ ರವರಿಗೆ ಕಾರ್ಯದೇಶ ಸಂಖ್ಯೆ:-BDA/EE(ID)W.O/T-01/2018-19 ರಲ್ಲಿ ದಿನಾಂಕ:-25.05.2018 ರಂದು ನೀಡಲಾಗಿದೆ. ಈ ಕರಾರನ್ನು 30 ವರ್ಷಗಳಿಗೆ ನೀಡಲಾಗಿದ್ದು, ಪ್ರತಿ ವರ್ಷಕ್ಕೆ ರೂ.1.1 ಕೋಟಿಗಳ ಮೊತ್ತಕ್ಕೆ ವಾರ್ಷಿಕ ಶೇ.5ರಷ್ಟು ಹೆಚ್ಚಳ ಮತ್ತು ತೆರಿಗೆಗಳನ್ನು ಹೊರತುಪಡಿಸಿ ಪ್ರಾಧಿಕಾರಕ್ಕೆ ನೆಲಬಾಡಿಗೆ ರೂಪದಲ್ಲಿ ಸಂದಾಯ ಮಾಡಬೇಕಾಗಿರುತ್ತದೆ. |
| ಆ | ಸದರಿ ಖಾಸಗಿ ಸಂಸ್ಥೆಯವರು ಎಷ್ಟು ಪ್ರದೇಶವನ್ನು ಎಷ್ಟು ಅಂದಾಜು ವೆಚ್ಚದಲ್ಲಿ ಉದ್ಯಾನವನವನ್ನಾಗಿ ಅಭಿವೃದ್ಧಿಪಡಿಸಿರುತ್ತಾರೆ; | 198583 ಚ.ಅಡಿ ಪ್ರದೇಶದಲ್ಲಿ ಉದ್ಯಾನವನ್ನು ಅಂದಾಜು ರೂ.98.98 ಲಕ್ಷಗಳ ವೆಚ್ಚದಲ್ಲಿ ಪೂರ್ಣವಾಗಿ ಅಭಿವೃದ್ಧಿಪಡಿಸಲಾಗಿರುತ್ತದೆ. |

| | | |
|---|---|---|
| ಇ | ಖಾಸಗಿ ಸಂಸ್ಥೆಗೆ ಎಲ್ಲಾ ಹೋರ್ಡಿಂಗ್ ಗಳಿಂದ ವರ್ಷಕ್ಕೆ ಎಷ್ಟು ಆದಾಯ ಬರಬಹುದೆಂದು ಅಂದಾಜಿಸಲಾಗಿದೆ; | ಪ್ರದರ್ಶನ ಫಲಕಗಳಿಂದ ಬರುವ ಆದಾಯವು ಅದನ್ನು ಅಳವಡಿಸಿರುವ ಸ್ಥಾನ, ಅಳತೆ, ನೋಟ ಮುಂತಾದ ಅಂಶಗಳಿಂದ ತುಂಬಾ ಏರಿಳಿತವಾಗಬಹುದಾಗಿದ್ದು, ಹರಾಜಿನಲ್ಲಿ ಬರುವ ಅತೀ ಹೆಚ್ಚು ಬಿಡ್ ಮೊತ್ತವನ್ನು ನಿಖರವಾಗಿ ತಿಳಿಯುವುದು ಕಷ್ಟವಾಗಿದೆ. ಆದಾಗ್ಯೂ ಅಂದಾಜಿನಂತೆ ಚ.ಅಡಿಗೆ ವಾರ್ಷಿಕ ರೂ.360.00 ಆದಾಯ ನಿರೀಕ್ಷಿಸಬಹುದಾಗಿದೆ. ಈ ಪ್ರಕಾರ ಅನುಮತಿ ನೀಡಿರುವ 61,780 ಚ.ಅ ಪ್ರದರ್ಶನ ಫಲಕದಿಂದ ವಾರ್ಷಿಕ ರೂ.2.23 ಕೋಟಿ ಆದಾಯ ಖಾಸಗಿ ಸಂಸ್ಥೆಗೆ ಬರುವ ನಿರೀಕ್ಷೆ ಇರುತ್ತದೆ. ಬಿಬಿಎಂಪಿಯಿಂದ ಅನುಮತಿ ಪಡೆಯುವಲ್ಲಿ ತದನಂತರ ಕೋವಿಡ್-19 ನಿಂದಾಗಿ ವಿಳಂಬವಾಗಿದ್ದು, ಒಟ್ಟು 61,780 ಚ.ಅಡಿ ಅಳತೆಯ ಪ್ರದರ್ಶನ ಫಲಕಗಳಿಗೆ ನೀಡಿರುವ ಅನುಮತಿ ಪೈಕಿ ದಿನಾಂಕ:-15.09.2020 ರಿಂದ ಇಲ್ಲಿಯವರೆಗೆ 17,300 ಚ.ಅಡಿಗಳ ನಾಮಫಲಕವನ್ನು ಅಳವಡಿಸಲಾಗಿದೆ. ಇದುವರೆವಿಗೂ ಯಾವುದೇ ಆದಾಯ ಬಂದಿರುವುದಿಲ್ಲವೆಂದು ಬಿಡ್ಡುದಾರ ಸಂಸ್ಥೆಯವರು ತಿಳಿಸಿರುತ್ತಾರೆ. |
| ಈ | ಖಾಸಗಿ ಸಂಸ್ಥೆಗೆ ಬರಬಹುದಾದ ಆದಾಯ ಮತ್ತು ಸಾರ್ವಜನಿಕರಿಗೆ ಆಗಿರುವ ಅನುಕೂಲಗಳನ್ನು ತುಲನೆ ಮಾಡಿದರೆ, ಇದು ಖಾಸಗಿ ಸಂಸ್ಥೆಗೆ ದೊಡ್ಡ ಪ್ರಮಾಣದಲ್ಲಿ ಲಾಭ ಮಾಡಿಕೊಡುವಂತಹ ಯೋಜನೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಪಿಪಿಪಿ (ಸಾರ್ವಜನಿಕ-ಖಾಸಗಿ ಸಹಭಾಗಿತ್ವ ಮಾದರಿಯಲ್ಲಿ) ಯೋಜನೆಯಡಿ ಹೆಬ್ಬಾಳ ಮೇಲುಸೇತುವೆ ಕೆಳಭಾಗದ ತೆರೆದ ಪ್ರದೇಶದಲ್ಲಿ ಲ್ಯಾಂಡ್ ಸ್ಕೇಪ್ ಮಾಡುವುದು, ಗಿಡಗಳನ್ನು ನೆಡುವುದು, ಹಾರ್ಡ್ ಸ್ಕೇಪ್ ಅಭಿವೃದ್ಧಿ, ಆರ್ಬೋರಿಕಲ್ಚರ್ ಮಾಡುವುದು, ಕರ್ಬ್ ಸ್ಟೋನ್ಸ್, ಮೀಡಿಯನ್ ಮತ್ತು ಪಾದಚಾರಿ ಮಾರ್ಗಗಳ ಅಭಿವೃದ್ಧಿ ಹಾಗೂ ಉದ್ಯಾನವನದ ಅಭಿವೃದ್ಧಿ ಮತ್ತು 30 ವರ್ಷಗಳ ನಿರ್ವಹಣೆ ಕಾರ್ಯವನ್ನು ಜಾಹೀರಾತು ಹಕ್ಕುಗಳ ಎದುರಿಗೆ 30 ವರ್ಷಗಳ ಅವಧಿಗೆ ಅನುಮತಿಸಿರುವ ಸ್ಥಳಗಳಲ್ಲಿ ವಿವಿಧ ವಿನ್ಯಾಸದ ಜಾಹೀರಾತು ಫಲಕಗಳನ್ನು ಅಳವಡಿಸಿ ಪ್ರದರ್ಶಿಸಲು ನೆಲಬಾಡಿಗೆ ರೂಪದಲ್ಲಿ ಪ್ರಾಧಿಕಾರಕ್ಕೆ ವರ್ಷಕ್ಕೆ ರೂ.1.10 ಕೋಟಿಗಳು + ವಾರ್ಷಿಕವಾಗಿ ಶೇ.5 ರಷ್ಟು ಹೆಚ್ಚಳ + ತೆರಿಗೆಗಳು ಆದಾಯವಾಗುತ್ತಿದ್ದು, ಸಾರ್ವಜನಿಕರಿಗೂ ಇದರಿಂದ ಅನುಕೂಲವಾಗುತ್ತಿದೆ. ಈ ಯೋಜನೆಗೆ ಪ್ರಾಥಮಿಕವಾಗಿ ರೂ.16.18 ಕೋಟಿ ಹೂಡಿಕೆ ಬೇಕಾಗಿದ್ದು, ವಾರ್ಷಿಕವಾಗಿ ರೂ.40.00 ಲಕ್ಷಗಳನ್ನು ನಿರ್ವಹಣೆಗಾಗಿ ಗುತ್ತಿಗೆದಾರರು ವ್ಯಯಿಸಬೇಕಾಗಿರುತ್ತದೆ. ನಂತರದ ದಿನಗಳಲ್ಲಿ ಪ್ರದರ್ಶನ ಫಲಕಗಳಿಂದ ಆದಾಯ ಪಡೆದು ಬಂಡವಾಳ ವೆಚ್ಚವನ್ನು ಸರಿದೂಗಿಸಿಕೊಳ್ಳುವಂತೆ ಖಾಸಗಿ ಸಹಭಾಗಿತ್ವದಲ್ಲಿ (PPP Model) ಟೆಂಡರ್ ಆಹ್ವಾನಿಸಿ, ಅತೀ ಹೆಚ್ಚಿನ ಮೊತ್ತ ನೀಡಿರುವ ಬಿಡ್ಡುದಾರರಿಗೆ ವಹಿಸಿರುವುದರಿಂದ ಖಾಸಗಿ ಸಂಸ್ಥೆಗೆ ದೊಡ್ಡ ಪ್ರಮಾಣದಲ್ಲಿ ಲಾಭವಾಗುವ ಸಂಭವವಿರುವುದಿಲ್ಲ. |
| ಉ | ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು | |

ಸಂಖ್ಯೆ : ನ. ಅ.ಇ 200 ಬೆಂಭೂಸ್ವಾ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ಸರ್ಕಾರ

ಸಂಖ್ಯೆ:ಜಸಂಇ 149 ಎನ್‌ಎಲ್‌ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
3ನೇ ಮಹಡಿ, ವಿಕಾಸ ಸೌಧ,
ಬೆಂಗಳೂರು, ದಿನಾಂಕ: 07/12/20.

Stard.
4
8/12/2020
@ 9:50 AM

ಇಂದ :
ಸರ್ಕಾರದ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ.

ಇವರಿಗೆ :
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ / ~~ಪರಿಷತ್ತು~~,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ / ~~ಪರಿಷತ್ತಿನ~~ ಸದಸ್ಯರಾದ ಶ್ರೀ / ~~ಶ್ರೀಮತಿ~~ ಅಪ್ಪಚ್ಚು (ರಂಜನ್) ಎಂ.ಪಿ. ಇವರ ಚುಕ್ಕೆ ಗುರುತಿನ / ~~ಗುರುತಿಲ್ಲದ~~ ಪ್ರಶ್ನೆ ಸಂಖ್ಯೆ: 76. ಕ್ಕೆ ಉತ್ತರಗಳನ್ನು ಸಲ್ಲಿಸುವ ಬಗ್ಗೆ.

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ / ~~ಪರಿಷತ್ತಿನ~~ ಸದಸ್ಯರಾದ ಶ್ರೀ / ~~ಶ್ರೀಮತಿ~~ ಅಪ್ಪಚ್ಚು (ರಂಜನ್) ಎಂ. ಪಿ. ಇವರ ಚುಕ್ಕೆ ಗುರುತಿನ / ~~ಗುರುತಿಲ್ಲದ~~ ಪ್ರಶ್ನೆ ಸಂಖ್ಯೆ: 76 ಕ್ಕೆ ಉತ್ತರದ 350. ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ಅದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,
V. Geeth
ಶಾಖಾಧಿಕಾರಿ (ತಾಂತ್ರಿಕ-2),
ಜಲ ಸಂಪನ್ಮೂಲ ಇಲಾಖೆ.

## ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 76
2. ಸದಸ್ಯರ ಹೆಸರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ.
3. ಉತ್ತರಿಸಬೇಕಾದ ದಿನಾಂಕ : 08-12-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಕಳೆದ ಮೂರು ವರ್ಷಗಳಿಂದ ಉಂಟಾದ ಜಲಪ್ರಳಯದ ಸಂದರ್ಭದಲ್ಲಿ ಕೊಡಗು ಜಿಲ್ಲೆಯ ಹಾರಂಗಿ ಹಾಗೂ ಹೇಮಾವತಿ ಅಚ್ಚುಕಟ್ಟು ಪ್ರದೇಶಗಳಲ್ಲಿ ಮೂಲಭೂತ ಸೌಲಭ್ಯವು ಹಾನಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಕಳೆದ ಮೂರು ವರ್ಷಗಳಿಂದ ಉಂಟಾದ ಜಲಪ್ರಳಯದ ಸಂದರ್ಭದಲ್ಲಿ ಕೊಡಗು ಜಿಲ್ಲೆಯ ಹಾರಂಗಿ ಅಚ್ಚುಕಟ್ಟು ಪ್ರದೇಶಗಳಲ್ಲಿ ಮೂಲಭೂತ ಸೌಲಭ್ಯವು ಹಾನಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ | ಬಂದಿದ್ದಲ್ಲಿ, ಕಳೆದ ಮೂರು ವರ್ಷಗಳಿಂದ ಸರ್ಕಾರ ಯಾವ ಯಾವ ಕಾಮಗಾರಿಗಳಿಗೆ ಎಷ್ಟೆಷ್ಟು ಅನುದಾನ ಮೀಸಲಿಟ್ಟಿದೆ ? (ಪೂರ್ಣ ವಿವರ ನೀಡುವುದು) | 2019-20 ನೇ ಸಾಲಿನಲ್ಲಿ ಹಾರಂಗಿ ಜಲಾನಯನ ಪ್ರದೇಶ ಹಾಗೂ ನದಿ ಪಾತ್ರದಲ್ಲಿ ಉಂಟಾಗಿದ್ದ ಹಾನಿಯನ್ನು ಸರಿಪಡಿಸಲು ಹಾರಂಗಿ ನದಿ ಪುನಶ್ಚೇತನ ಹಾಗೂ ರಕ್ಷಣಾ ಕಾಮಗಾರಿಯ ರೂ.130.00 ಕೋಟಿ ಮೊತ್ತದ ಅಂದಾಜಿಗೆ ಸರ್ಕಾರದಿಂದ ದಿನಾಂಕ:19-11-2020 ರಂದು ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಮುಂದಿನ ಕ್ರಮ ಕೈಗೊಳ್ಳಲಾಗುತ್ತಿದೆ.<br><br>2018-19 ಮತ್ತು 2020-21 ನೇ ಸಾಲುಗಳಲ್ಲಿ ಹಾರಂಗಿ ಹಾಗೂ ಹೇಮಾವತಿ ವ್ಯಾಪ್ತಿಯಲ್ಲಿ ಯಾವುದೇ ಮಳೆ ಹಾನಿ ಪ್ರಕರಣಗಳು ವರದಿಯಾಗಿರುವುದಿಲ್ಲ. |

*ಸಂಖ್ಯೆ:ಜಸಂಇ 149 ಎನ್‌ಎಲ್‌ಎ 2020*

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 236 ಎಂಎನ್‌ವೈ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 07-12-2020.

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿಗಳು
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 376 ಕ್ಕೆ ಉತ್ತರ ನೀಡುವ ಬಗ್ಗೆ.

**ಉಲ್ಲೇಖ:** ಕರ್ನಾಟಕ ವಿಧಾನಸಭೆ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/8ಅ/ಪ್ರ.ಸಂ.376/2020, ದಿನಾಂಕ: 01-12-2020.

* * * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 376 ಕ್ಕೆ ಸರ್ಕಾರದ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಲಕ್ಷ್ಮೀಸಾಗರ್ ಎನ್.ಕೆ.)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ (ಬಿ.ಬಿ.ಎಂ.ಪಿ.)

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 376
2. ಸದಸ್ಯರ ಹೆಸರು : ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ)
3. ಉತ್ತರಿಸುವ ದಿನಾಂಕ : 08-12-2020
4. ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ಮಹಾನಗರ ವ್ಯಾಪ್ತಿಯಲ್ಲಿನ ತ್ಯಾಜ್ಯ ವಿಲೇವಾರಿ ಸಮಸ್ಯೆಗೆ ಶಾಶ್ವತ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಕನಕಪುರ / ಮಧುಗಿರಿ ಪ್ರದೇಶದಲ್ಲಿ ಒಂದು ಸಾವಿರ ಎಕರೆ ಪ್ರದೇಶದಲ್ಲಿ ತ್ಯಾಜ್ಯ ಪುನರ್ ಬಳಕೆ ಪಾರ್ಕ್ ಸ್ಥಾಪನೆ ಮಾಡುವ ಸಂಬಂಧ ಈ ಹಿಂದೆ ಚಾಲನೆಯಲ್ಲಿದ್ದ ಪ್ರಸ್ತಾವನೆಗೆ ಮುನ್ನಡೆ ನೀಡುವ ಕುರಿತು ಸರ್ಕಾರದ ನಿಲುವುಗಳೇನು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿನ ತ್ಯಾಜ್ಯ ವಿಲೇವಾರಿ ಸಮಸ್ಯೆಗೆ ಶಾಶ್ವತ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಈ ಹಿಂದೆ ಮಧುಗಿರಿ ಮತ್ತು ಕನಕಪುರದಲ್ಲಿ ಸಾವಿರ ಎಕರೆ ಪ್ರದೇಶದಲ್ಲಿ ತ್ಯಾಜ್ಯ ಪುನರ್ ಬಳಕೆ ಪಾರ್ಕ್ ಸ್ಥಾಪನೆ ಮಾಡುವ ಸಂಬಂಧ ಪ್ರಸ್ತಾವನೆ ಇತ್ತು. ಆದರೆ, ಸದರಿ ಪ್ರದೇಶದಲ್ಲಿ ಸ್ಥಳೀಯರಿಂದ ಪ್ರತಿರೋಧ ವ್ಯಕ್ತವಾಗಿರುವುದರಿಂದ ಸದ್ಯಕ್ಕೆ ಪ್ರಸ್ತಾವನೆಯನ್ನು ತಡೆಹಿಡಿಯಲಾಗಿದೆ. |
| ಆ | ಬೃಹತ್ ಸಮಸ್ಯೆಯಾಗಿಯೇ ಮುಂದುವರೆಯುತ್ತಿರುವ ತ್ಯಾಜ್ಯ ವಿಲೇವಾರಿ ಸಮಸ್ಯೆಗೆ ಖಾಯಂ ಪರಿಹಾರ ನೀಡಿಕೆಗೆ ಸರ್ಕಾರ ಪರಿಹಾರವನ್ನು ಕಂಡುಕೊಂಡಿದ್ದಲ್ಲಿ ಆ ಕುರಿತ ವಿವರಗಳೇನು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿನ ತ್ಯಾಜ್ಯ ವಿಲೇವಾರಿ ಸಮಸ್ಯೆಗೆ ಖಾಯಂ ಪರಿಹಾರ ಒದಗಿಸಲು ಹಲವಾರು ಕ್ರಮಗಳನ್ನು / ಯೋಜನೆಗಳನ್ನು ರೂಪಿಸಲಾಗಿರುತ್ತದೆ. ಸದರಿ ವಿವರಗಳನ್ನು **ಅನುಬಂಧ** ದಲ್ಲಿ ಲಗತ್ತಿಸಿದೆ. |
| ಇ | ಸ್ವಚ್ಛ ಭಾರತ ಅಭಿಯಾನದ ಅಡಿಯಲ್ಲಿ ದೆಹಲಿಯಲ್ಲಿ ಈ ಕುರಿತಾಗಿ ಕೈಗೊಂಡ ವಿಎಸ್ ತಂತ್ರಜ್ಞಾನದಡಿಯಲ್ಲಿ ಕಸವನ್ನು ವಿದ್ಯುತ್ ಆಗಿ ಪರಿವರ್ತಿಸುವ ಘಟಕಗಳನ್ನು ಸ್ಥಾಪಿಸುವ ದಿಶೆಯಲ್ಲಿ ಸರ್ಕಾರವು ಕೈಗೊಂಡ ಕ್ರಮಗಳೇನು; ತ್ವರಿತ ಕ್ರಮಗಳ ಮೂಲಕ ತ್ಯಾಜ್ಯ ವಿಲೇವಾರಿ ನಿರ್ವಹಣೆಗೆ ಸರ್ಕಾರದ ಕ್ರಮಗಳೇನು? | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ ಘನತ್ಯಾಜ್ಯವನ್ನು ವೈಜ್ಞಾನಿಕವಾಗಿ ಸಂಸ್ಕರಣೆ ಮಾಡಿ, ಘನ ತ್ಯಾಜ್ಯದಿಂದ ವಿದ್ಯುತ್ ಉತ್ಪಾದನೆ ಮಾಡುವ ಈ ಕೆಳಕಂಡ ಯೋಜನೆಗಳಿಗೆ ಸರ್ಕಾರವು ಅನುಮೋದನೆ ನೀಡಿರುತ್ತದೆ.<br>1. ಮೆ॥ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (KPCL) ರವರ ವತಿಯಿಂದ ಬಿಡದಿಯಲ್ಲಿ ಪ್ರತಿದಿನ 600 ಮೆಟ್ರಿಕ್ ಟನ್ ಸಾಮರ್ಥ್ಯದ ಘನತ್ಯಾಜ್ಯ / ಆರ್.ಡಿ.ಎಫ್. ಅನ್ನು ಉಪಯೋಗಿಸಿ 11.50 ಮೆಗಾ |

| | | |
|---|---|---|
| | | ವ್ಯಾಟ್ ವಿದ್ಯುತ್ ಉತ್ಪಾದನಾ ಘಟಕವನ್ನು ಸ್ಥಾಪಿಸುವ ಯೋಜನೆಯು ರೂ.[illegible]60.00 ಕೋಟಿಗಳಿಗೆ ಅನುಮೋದನೆಗೊಂಡಿದ್ದು, ಕಾರ್ಯಾದೇಶವನ್ನು ನೀಡಲಾಗಿರುತ್ತದೆ.<br>2. ಸಾರ್ವಜನಿಕ ಖಾಸಗಿ ಸಹಭಾಗಿತ್ವ (ಪಿ.ಪಿ.ಪಿ.) ಮಾದರಿಯಲ್ಲಿ ಮೆ॥ ಸತಾರೆಂ ಎಂಟರ್‌ಪ್ರೈಸಸ್ ಪ್ರೈ.ಲಿ. ಸಂಸ್ಥೆ ವತಿಯಿಂದ ಪ್ರತಿದಿನ 1000 ಮೆಟ್ರಿಕ್ ಟನ್ ಮಿಶ್ರ ಘನತ್ಯಾಜ್ಯವನ್ನು ಉಪಯೋಗಿಸಿ, 12 ಮೆಗಾ ವ್ಯಾಟ್ ವಿದ್ಯುತ್ ಉತ್ಪಾದನಾ ಘಟಕವನ್ನು ಕನ್ನಲ್ಲಿ ಘಟಕದಲ್ಲಿ ಸ್ಥಾಪಿಸಲು ಸರ್ಕಾರವು ಅನುಮೋದನೆ ನೀಡಿರುತ್ತದೆ. ಸದರಿ ಯೋಜನೆಯನ್ನು ಮುಂಬರುವ 24 ತಿಂಗಳಲ್ಲಿ ಪೂರ್ಣಗೊಳಿಸಲು ಉದ್ದೇಶಿಸಲಾಗಿದೆ.<br>3. ಪಿ.ಪಿ.ಪಿ. ಮಾದರಿಯಲ್ಲಿ ಬಿಬಿಎಂಪಿ ವತಿಯಿಂದ ಮೆ॥ ಇಂಡಿಯಂ ಸಂಸ್ಥೆಯಿಂದ 300 ಮೆಟ್ರಿಕ್ ಟನ್ ಪ್ರತಿದಿನ ಮಿಶ್ರ ಘನತ್ಯಾಜ್ಯವನ್ನು ಉಪಯೋಗಿಸಿ 4 ಮೆಗಾ ವ್ಯಾಟ್ ವಿದ್ಯುತ್ ಉತ್ಪಾದನೆ ಘಟಕವನ್ನು ದೊಡ್ಡಬಿದರಕಲ್ಲು ಘಟಕದಲ್ಲಿ ಸ್ಥಾಪಿಸಲು ಸರ್ಕಾರವು ಅನುಮೋದನೆ ನೀಡಿರುತ್ತದೆ. ಸದರಿ ಯೋಜನೆಯನ್ನು ಮುಂಬರುವ 12 ತಿಂಗಳಿನಲ್ಲಿ ಪೂರ್ಣಗೊಳಿಸಲು ಉದ್ದೇಶಿಸಿದೆ.<br>4. ಪಿ.ಪಿ.ಪಿ. ಮಾದರಿಯಲ್ಲಿ ಮಾವಳ್ಳಿಪುರ ಘಟಕದಲ್ಲಿ ಮೆ॥ ಫರ್ಮ್‌ಗ್ರೀನ್ ಸಂಸ್ಥೆಯಿಂದ ಪ್ರತಿದಿನ 1000 ಮೆಟ್ರಿಕ್ ಟನ್ ಘನತ್ಯಾಜ್ಯ ಉಪಯೋಗಿಸಿ Compressed Natural Gas ಉತ್ಪಾದನೆ ಮಾಡಲು ಸರ್ಕಾರವು ದಿನಾಂಕ: 19.11.2020 ರಂದು ಅನುಮೋದನೆ ನೀಡಿರುತ್ತದೆ.<br>ಅದರಂತೆ, ಇನ್ನಿತರೇ ಎರಡು ಯೋಜನೆಗಳಾದ ಮಾರೇನಹಳ್ಳಿ ಸ್ಥಳದಲ್ಲಿ 600 ಮೆಟ್ರಿಕ್ ಟನ್ ಪ್ರತಿದಿನ ಘನತ್ಯಾಜ್ಯದಿಂದ ವಿದ್ಯುತ್ ಉತ್ಪಾದನೆ ಮಾಡಲು ಮೆ॥ ನೆಕ್ಸಸ್ ನೊವಸ್ ಸಂಸ್ಥೆಯವರೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಬಗ್ಗೆ ಕ್ರಮ ವಹಿಸಲಾಗುತ್ತಿದೆ. |

| | | |
|---|---|---|
| | | 5. ಮೆ॥ ಎನ್.ಇ.ಜಿ ಸಂಸ್ಥೆಯವರಿಂದ ಮಾವಳ್ಳಿಪುರ ಘಟಕದಲ್ಲಿ 500 ಮೆಟ್ರಿಕ್ ಟನ್ ಪ್ರತಿದಿನ ಘನತ್ಯಾಜ್ಯವನ್ನು ಉಪಯೋಗಿಸಿ, 8 ಮೆಗಾ ವ್ಯಾಟ್ ವಿದ್ಯುತ್ ಉತ್ಪಾದಿಸುವ ಯೋಜನೆಗೆ ಸರ್ಕಾರ ಅನುಮೋದನೆ ನೀಡಿರುತ್ತದೆ.<br><br>ಮೇಲ್ಕಂಡ ಎಲ್ಲಾ ಯೋಜನೆಗಳನ್ನು ಕೈಗೆತ್ತಿಕೊಂಡು ಮುಂಬರುವ 2 ವರ್ಷಗಳಲ್ಲಿ ಪ್ರತಿದಿನ ಸುಮಾರು 4000 ಮೆಟ್ರಿಕ್ ಟನ್ ರಷ್ಟು ಘನತ್ಯಾಜ್ಯದಿಂದ ವಿದ್ಯುತ್ / ಸಿ.ಎನ್.ಜಿ. ಉತ್ಪಾದಿಸುವ ಘಟಕಗಳನ್ನು ಸ್ಥಾಪಿಸಲು ಕ್ರಮ ವಹಿಸಲಾಗುತ್ತಿದೆ. |

**ಸಂಖ್ಯೆ: ನಅಇ 236 ಎಂಎನ್‌ವೈ 2020**

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ)

ಮುಖ್ಯಮಂತ್ರಿ

## ಅನುಬಂಧ

### ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಘನತ್ಯಾಜ್ಯ ನಿರ್ವಹಣೆಯ ಬಗ್ಗೆ

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯು ಸುಮಾರು 709 ಚ.ಕಿ.ಮೀ ವಿಸ್ತೀರ್ಣ ಹೊಂದಿದ್ದು, ಪ್ರಸ್ತುತ ಒಟ್ಟು 1.30 ಕೋಟಿ ಜನಸಂಖ್ಯೆಯನ್ನು ಹೊಂದಿರುತ್ತದೆ. ನಗರದಲ್ಲಿ ವಿವಿಧ ವಸತಿ ಸಮುಚ್ಚಯ ಮತ್ತು ವಾಣಿಜ್ಯ ಸಮುಚ್ಚಯಗಳಿಂದ ಪ್ರತಿನಿತ್ಯ ಸುಮಾರು 5500 ಮೆಟ್ರಿಕ್ ಟನ್ ರಷ್ಟು ಘನತ್ಯಾಜ್ಯ ಉತ್ಪಾದನೆಯಾಗುತ್ತಿದ್ದು, ಘನತ್ಯಾಜ್ಯವನ್ನು ನಿರ್ವಹಣೆ ಮಾಡುವುದು ಪಾಲಿಕೆಯ ಹಾಗೂ ಸರ್ಕಾರದ ಜವಾಬ್ದಾರಿಯಾಗಿರುತ್ತದೆ.

ಬೆಂಗಳೂರು ನಗರ ವ್ಯಾಪ್ತಿಯಲ್ಲಿ ಪ್ರತಿದಿನ ಸುಮಾರು ವಸತಿ ಸಮುಚ್ಚಯಗಳಿಂದ 4000-4500 ಮೆಟ್ರಿಕ್ ಟನ್‌ರಷ್ಟು ಘನತ್ಯಾಜ್ಯ ಉತ್ಪತ್ತಿಯಾಗುತ್ತಿದ್ದು, ಸದರಿ ತ್ಯಾಜ್ಯವನ್ನು ಸೂಕ್ತ ರೀತಿಯಲ್ಲಿ ಸಂಗ್ರಹಣೆ, ಸಾಗಾಣಿಕೆ ಮಾಡಿ ವೈಜ್ಞಾನಿಕವಾಗಿ ಸಂಸ್ಕರಿಸಿ, ನಿರ್ವಹಣೆ ಮಾಡಲು ಮುಂಬರುವ ಐದು ವರ್ಷಗಳಲ್ಲಿ ಅನುಷ್ಠಾನಗೊಳಿಸಲು ಯೋಜನೆಗಳನ್ನು ರೂಪಿಸಲಾಗಿರುತ್ತದೆ ವಿವರಗಳು ಈ ಕೆಳಕಂಡಂತಿರುತ್ತವೆ.

- ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಹಾಲಿ 7 ಬಿಬಿಎಂಪಿ ಒಡೆತನದ ಸಂಸ್ಕರಣಾ ಘಟಕಗಳಿದ್ದು ಹಾಗೂ ಒಂದು ಖಾಸಗೀ ಸಂಸ್ಕರಣಾ ಘಟಕಗಳಲ್ಲಿ ಪ್ರತಿನಿತ್ಯ 1021 ಮೆಟ್ರಿಕ್. ಟನ್‌ರಷ್ಟು ಘನತ್ಯಾಜ್ಯವನ್ನು ಸಂಸ್ಕರಿಸಲಾಗುತ್ತಿರುತ್ತದೆ. ಘಟಕಗಳ ವಿವರಗಳು ಈ ಕೆಳಕಂಡಂತಿವೆ:

1 ದೊಡ್ಡಬಿದರಕಲ್ಲು
2 ಕನ್ನಳ್ಳಿ
3 ಸೀಗೇಹಳ್ಳಿ
4 ಚಿಕ್ಕನಾಗಮಂಗಲ
5 ಕೆ.ಸಿ.ಡಿ.ಸಿ.
6 ಲಿಂಗಧೀರನಹಳ್ಳಿ

Special Commissioner (S. W. M.)
Bruhath Bengaluru Mahanagara Palike

7 ಸುಬ್ಬರಾಯನಪಾಳ್ಯ
8 ಎಂ.ಎಸ್.ಜಿ.ಪಿ (ಖಾಸಗೀ)

- ಬಿಬಿಎಂಪಿ ವ್ಯಾಪ್ತಿಯಲ್ಲಿ ಒಟ್ಟು 13 ಬಯೋ-ಮಿಥೇನೇಶನ್ ಘಟಕಗಳನ್ನು ಸ್ಥಾಪಿಸಲಾಗಿದ್ದು, ಪ್ರತಿದಿನ 70 ಮೆಟ್ರಿಕ್ ಟನ್‌ರಷ್ಟು ಘನತ್ಯಾಜ್ಯವನ್ನು ಸಂಸ್ಕರಿಸಲಾಗುತ್ತಿರುತ್ತದೆ. ಅದರೊಂದಿಗೆ ವಾರ್ಡ್ 151 ರಲ್ಲಿ ಹೊಸದಾಗಿ 4 ಮೆಟ್ರಿಕ್ ಟನ್ ಸಾಮರ್ಥ್ಯದ Bio-CNG plant ಸ್ಥಾಪಿಸಲಾಗಿದ್ದು, ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿರುತ್ತವೆ.

- ಪಾಲಿಕೆ ವತಿಯಿಂದ ಘನತ್ಯಾಜ್ಯವನ್ನು ಸಂಸ್ಕರಣೆ ಮಾಡಿ ಈ ಕೆಳಕಂಡ ಯೋಜನೆಯಡಿಯಲ್ಲಿ ತ್ಯಾಜ್ಯದಿಂದ ವಿದ್ಯುತ್ ಉತ್ಪಾದನೆ ಮಾಡುವ ಯೋಜನೆಗಳಿಗೆ ಸರ್ಕಾರವು ಅನುಮೋದನೆಯನ್ನು ನೀಡಿರುತ್ತದೆ.

✓ ಮೆ॥ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ರವರ ವತಿಯಿಂದ ಬಿಡದಿಯಲ್ಲಿ ಪ್ರತಿದಿನ 600 ಮೆಟ್ರಿಕ್ ಟನ್ ಸಾಮರ್ಥ್ಯದ ಘನತ್ಯಾಜ್ಯ/ ಆರ್.ಡಿ.ಎಫ್. ಅನ್ನು ಉಪಯೋಗಿಸಿ 11.50 ಮೆಗಾ ವ್ಯಾಟ್ ವಿದ್ಯುತ್ ಉತ್ಪಾದನೆ ಘಟಕವನ್ನು ಸ್ಥಾಪಿಸುವ ಯೋಜನೆಗೆ ರೂ. 260.00 ಕೋಟಿಗಳಿಗೆ ಅನುಮೋದನೆಗೊಂಡಿದ್ದು, ಕಾರ್ಯಾದೇಶವನ್ನು ನೀಡಲಾಗಿರುತ್ತದೆ.

✓ ಅದೇ ರೀತಿ, ಪಿ.ಪಿ.ಪಿ. ಮಾದರಿಯಲ್ಲಿ ಬಿಬಿಎಂಪಿ ವತಿಯಿಂದ, ಮೆ॥ ಸತಾರಂ ಎಂಟರ್‌ಪ್ರೈಸಸ್ ಪ್ರೈ.ಲಿ. ಸಂಸ್ಥೆ ವತಿಯಿಂದ 1000 ಮೆಟ್ರಿಕ್ ಟನ್ ಪ್ರತಿದಿನ ಮಿಶ್ರ ಘನತ್ಯಾಜ್ಯವನ್ನು ಉಪಯೋಗಿಸಿ, 12 ಮೆಗಾ ವ್ಯಾಟ್ ವಿದ್ಯುತ್ ಉತ್ಪಾದನೆ ಘಟಕವನ್ನು ಕನ್ನಲ್ಲಿ ಘಟಕದಲ್ಲಿ ಸ್ಥಾಪಿಸಲು ಸರ್ಕಾರವು ಅನುಮೋದನೆ ನೀಡಿರುತ್ತದೆ. ಸದರಿ ಯೋಜನೆಯನ್ನು ಮುಂಬರುವ 24 ತಿಂಗಳಲ್ಲಿ ಪೂರ್ಣಗೊಳಿಸಲು ಉದ್ದೇಶಿಸಿದೆ.

✓ ಪಿ.ಪಿ.ಪಿ. ಮಾದರಿಯಲ್ಲಿ ಬಿಬಿಎಂಪಿ ವತಿಯಿಂದ ಮೆ॥ ಇಂಡಿಯಂ ಸಂಸ್ಥೆಯಿಂದ 300 ಮೆಟ್ರಿಕ್ ಟನ್ ಪ್ರತಿದಿನ ಮಿಶ್ರ ಘನತ್ಯಾಜ್ಯವನ್ನು ಉಪಯೋಗಿಸಿ 4 ಮೆಗಾ ವ್ಯಾಟ್ ವಿದ್ಯುತ್ ಉತ್ಪಾದನೆ ಘಟಕವನ್ನು ದೊಡ್ಡಬಿದರಕಲ್ಲು ಘಟಕದಲ್ಲಿ ಸ್ಥಾಪಿಸಲು ಸರ್ಕಾರವು

Special Commissioner (S. W. M.)
Bruhath Bengaluru Mahanagara Palike

ಅನುಮೋದನೆಯನ್ನು ನೀಡಿರುತ್ತದೆ. ಸದರಿ ಯೋಜನೆಯನ್ನು ಮುಂಬರುವ 12 ತಿಂಗಳಿನಲ್ಲಿ ಪೂರ್ಣಗೊಳಿಸಲು ಉದ್ದೇಶಿಸಿದೆ.

✓ ಪಿ.ಪಿ.ಪಿ. ಮಾದರಿಯಲ್ಲಿ ಮಾವಳ್ಳಿಪುರ ಘಟಕದಲ್ಲಿ ಮೆ॥ ಫರ್ಮ್‌ಗ್ರೀನ್ ಸಂಸ್ಥೆಯಿಂದ ಪ್ರತಿದಿನ 1000 ಮೆಟ್ರಿಕ್ ಟನ್ ಘನತ್ಯಾಜ್ಯ ಉಪಯೋಗಿಸಿ Compressed Natural Gas ಉತ್ಪಾದನೆ ಮಾಡಲು ಸರ್ಕಾರವು ಸದರಿ ಯೋಜನೆಗೆ ದಿನಾಂಕ: 19.11.2020 ರಂದು ಅನುಮೋದನೆ ನೀಡಿರುತ್ತದೆ.

✓ ಅದರಂತೆ, ಮೆ॥ ಎನ್.ಇ.ಜಿ ಸಂಸ್ಥೆಯವರಿಂದ ಮಾವಳ್ಳಿಪುರ ಘಟಕದಲ್ಲಿ 600 ಮೆಟ್ರಿಕ್ ಟನ್ ಪ್ರತಿದಿನ ಘನತ್ಯಾಜ್ಯವನ್ನು ಉಪಯೋಗಿಸಿ. 12 ಮೆಗಾ ವ್ಯಾಟ್ ವಿದ್ಯುತ್ ಉತ್ಪಾದಿಸುವ ಯೋಜನೆಗೆ ದಿನಾಂಕ: 30.10.2019 ರಂದು ಸರ್ಕಾರವು ಅನುಮೋದನೆ ನೀಡಿರುತ್ತದೆ.

✓ ಬಿಬಿಎಂಪಿ ವ್ಯಾಪ್ತಿಯ ಎರಡು ಸ್ಥಳಗಳಲ್ಲಿ ಪ್ರತಿನಿತ್ಯ 50 ಟನ್ ಸಾಮರ್ಥ್ಯದ ಅಗ್ರಿಗೇಟ್ ಸೆಂಟರ್‌ಗಳನ್ನು ಸ್ಥಾಪಿಸಲು "ಶುಭ್ರ ಬೆಂಗಳೂರು" ಯೋಜನೆಯಡಿ ಕೈಗೆತ್ತಿಕೊಳ್ಳಲು ಉದ್ದೇಶಿಸಲಾಗಿರುತ್ತದೆ. ಸದರಿ ಅಗ್ರಿಗೇಟ್ ಸೆಂಟರ್‌ಗಳಿಂದ ಉತ್ಪತ್ತಿಯಾಗುವ ಆರ್.ಡಿ.ಎಫ್./ non reusable, non recyclable ವಸ್ತುಗಳನ್ನು waste to energy plant ಅಥವಾ ಸಿಮೆಂಟ್ ಫ್ಯಾಕ್ಟರಿಗಳಿಗೆ ಇಂಧನ ಪೂರೈಕೆಗಾಗಿ ಬಳಸಬಹುದಾಗಿರುತ್ತದೆ.

✓ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಘನತ್ಯಾಜ್ಯ ನಿಯಮ –2016 ರಂತೆ ಕಟ್ಟಡ ಹಾಗೂ ಭಗ್ನಾವಶೇಷಗಳನ್ನು ಸಂಸ್ಕರಿಸಲು ಪ್ರತಿನಿತ್ಯ 1000 ಮೆಟ್ರಿಕ್ ಟನ್ ಸಾಮರ್ಥ್ಯದ ಘಟಕವನ್ನು ಚಿಕ್ಕಜಾಲದಲ್ಲಿ ಸ್ಥಾಪಿಸಲಾಗಿದೆ. ಇದಲ್ಲದೇ, M/s. Rubble Revival Pvt. Ltd. (an SPV of M/s Rock Crystals) ರವರಿಗೆ ಪ್ರತಿದಿನ 750 ಮೆಟ್ರಿಕ್ ಟನ್ ಸಾಮರ್ಥ್ಯದ ಕಟ್ಟಡ ಹಾಗೂ ಭಗ್ನಾವಶೇಷಗಳನ್ನು ಸಂಸ್ಕರಿಸುವ ಘಟಕ ಸ್ಥಾಪಿಸಲು ಕಾರ್ಯಾದೇಶ ನೀಡಿದ್ದು, ಸದರಿ ಘಟಕವನ್ನು ನಿರ್ವಹಿಸಲು ಪೂರ್ವ ಸಿದ್ಧತಾ ಕಾಮಗಾರಿಗಳನ್ನು ಪ್ರಾರಂಭಿಸಲಾಗಿರುತ್ತದೆ.

Special Commissioner (S. W. M.)
Bruhath Bengaluru Mahanagara Palike

- ✓ ಒಣತ್ಯಾಜ್ಯ ಸಂಗ್ರಹಣೆ ಮತ್ತು ಸಂಸ್ಕರಣಾ ಘಟಕಗಳನ್ನು ಮೇಲ್ದರ್ಜೇಗೇರಿಸುವುದು ಮತ್ತು ಹೊಸ ಘಟಕಗಳನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಲಾಗಿದೆ.

- ✓ ಬಿಬಿಎಂಪಿ ವ್ಯಾಪ್ತಿಯ ಹಲವಾರು ಪಾರ್ಕ್‌ಗಳಲ್ಲಿ ಶ್ರೆಡ್ಡರ್ ಮತ್ತು ಚಾಪರ್ಸ್ ಯಂತ್ರಗಳನ್ನು ಸ್ಥಾಪಿಸಲಾಗಿದ್ದು, ಇದರಿಂದಾಗಿ. ಉದ್ಯಾನವದಲ್ಲಿ ಉತ್ಪತ್ತಿಯಾಗುತ್ತಿರುವ ಒಣಎಲೆಗಳನ್ನು ಪುಡಿಮಾಡಿ ಗೊಬ್ಬರ ತಯಾರಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. ಇದಲ್ಲದೇ, ಇನ್ನೂ ಹಲವಾರು ಸ್ಥಳಗಳಲ್ಲಿ ಸದರಿ ಯಂತ್ರಗಳನ್ನು ಸ್ಥಾಪಿಸಲು ಪ್ರಸ್ತಾಪಿಸಲಾಗಿರುತ್ತದೆ.

ಮೇಲೆ ತಿಳಿಸಿರುವ ಈ ಎಲ್ಲಾ ಯೋಜನೆಗಳನ್ನು ಕೈಗೆತ್ತಿಕೊಂಡು ಸಮರ್ಪಕವಾಗಿ ನಿರ್ವಹಣೆ ಮಾಡಲು ಹಾಗೂ ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳಲಾಗುವುದು.

Special Commissioner (S. W. M.)
Bruhath Bengaluru Mahanagara Palike

## ಕರ್ನಾಟಕ ಸರ್ಕಾರ

ಸಂಖ್ಯೆ: ಲಾ- ಎಲ್‌ಸಿಇ/ 174 /2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ: 07.12.2020.

ಇವರಿಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿಯವರು,
ಕಾನೂನು ಇಲಾಖೆ,
ವಿಧಾನ ಸೌಧ, ಬೆಂಗಳೂರು-560001.

6
8/12/2020

ಇವರಿಗೆ:

ಕಾರ್ಯದರ್ಶಿಯವರು,
ಕರ್ನಾಟಕ ವಿಧಾನ ಸಭೆಯ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು-560001.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 330ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ವಿಧಾನ ಸಭೆಯ ಸಚಿವಾಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/8ಅ/ಪ್ರ.ಸಂ.330/2020,ದಿನಾಂಕ:30.09.2020.

******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದತ್ತ ತಮ್ಮ ಗಮನ ಸೆಳೆಯಲಾಗಿದೆ. ಸದರಿ ಪ್ರಶ್ನೆಗೆ ಕನ್ನಡ ಭಾಷೆಯಲ್ಲಿನ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಆರ್. ವಿಜಯಕುಮಾರಿ)
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1),
ಕಾನೂನು ಇಲಾಖೆ.

ಇದರ ಪ್ರತಿಯನ್ನು ಮೇಲ್ಕಂಡ ಉತ್ತರದ ಪ್ರತಿಯೊಂದಿಗೆ ಕಳುಹಿಸಿದೆ:-

1. ಮಾನ್ಯ ಕಾನೂನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರ ಆಪ್ತ ಕಾರ್ಯದರ್ಶಿಯವರು, ವಿಧಾನ ಸೌಧ, ಬೆಂಗಳೂರು-1.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಯವರು, ಕಾನೂನು ಇಲಾಖೆ, ವಿಧಾನ ಸೌಧ, ಬೆಂಗಳೂರು-1.

k

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| (1) | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: | : | 330 |
| (2) | ಸದಸ್ಯರ ಹೆಸರು | : | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| (3) | ಉತ್ತರಿಸಬೇಕಾದ ದಿನಾಂಕ | : | 08.12.2020 |
| (4) | ಉತ್ತರಿಸುವ ಸಚಿವರು | : | ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| (ಅ) | ಕಿತ್ತೂರು ತಾಲ್ಲೂಕಿನಲ್ಲಿ ನ್ಯಾಯಾಲಯ ಕಟ್ಟಡ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುವುದು ನಿಜವೇ; | ಹೌದು |
| (ಆ) | ಹಾಗಿದ್ದಲ್ಲಿ, ಅನುದಾನ ಬಿಡುಗಡೆಗೆ ಸರ್ಕಾರದ ಕ್ರಮವೇನು | ವಿಷಯಕ್ಕೆ ಸಂಬಂಧಿಸಿದಂತೆ ದಿನಾಂಕ: 02.06.2020 ರ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವನ್ನು ಪ್ರಸ್ತಾವನೆಯ ಕುರಿತು ವರದಿ ನೀಡುವಂತೆ ಕೋರಲಾಗಿದ್ದು, ಅದರಂತೆ ಸದರಿಯವರು ದಿನಾಂಕ:10.09.2020 ರ ಪತ್ರದಲ್ಲಿ ವರದಿ ನೀಡಿದ್ದು, ಬೆಳಗಾವಿ ಜಿಲ್ಲೆಯ ಚೆನ್ನಮ್ಮನ ಕಿತ್ತೂರು ತಾಲೂಕಿನ ನ್ಯಾಯಾಲಯಗಳ ಸಂಕೀರ್ಣ ಕಟ್ಟಡ ನಿರ್ಮಾಣಕ್ಕೆ ಅಗತ್ಯವಾದ ಲೇಔಟ್ ಪ್ಲಾನ್ ಮತ್ತು ಡ್ರಾಯಿಂಗ್ ಗಳಿಗಾಗಿ ಚೀಫ್ ಆರ್ಕಿಟೆಕ್ಟ್, ಕರ್ನಾಟಕ ಸರಕಾರ ಇವರಿಗೆ ಕಳುಹಿಸಲಾಗಿದ್ದು, ಸದರಿ ಡ್ರಾಯಿಂಗ್ ಅನುಮೋದಿಸಲ್ಪಟ್ಟ ಬಳಿಕ ಅನುದಾನವನ್ನು ಬಿಡುಗಡೆ ಮಾಡುವ ಕುರಿತು ಕ್ರಮ ಕೈಗೊಳ್ಳಲಾಗುವುದು<br>ಮುಂದುವರಿದು, ಬೆಳಗಾವಿ ಜಿಲ್ಲೆಯ ಚೆನ್ನಮ್ಮನ ಕಿತ್ತೂರು ತಾಲೂಕಿನ ನ್ಯಾಯಾಲಯಗಳ ಸಂಕೀರ್ಣ ಕಟ್ಟಡ ನಿರ್ಮಾಣಕ್ಕೆ ಅಗತ್ಯವಾದ ಅನುದಾನವನ್ನು ಬಿಡುಗಡೆ ಮಾಡುವ ಕುರಿತು ಪ್ರಸ್ತುತ ಹಂತದ ಮಾಹಿತಿಯನ್ನು ಒದಗಿಸುವಂತೆ ಲೋಕೋಪಯೋಗಿ ಇಲಾಖೆಯನ್ನು ದಿನಾಂಕ:27.11.2020 ರ ಅನಧಿಕೃತ ಟಿಪ್ಪಣಿಯಲ್ಲಿ ಕೋರಲಾಗಿದ್ದು, ಮಾಹಿತಿ ನಿರೀಕ್ಷಿಸಲಾಗಿದೆ. |
| (ಇ) | ಯಾವ ಕಾಲಮಿತಿಯೊಳಗೆ ಅನುದಾನ ಬಿಡುಗಡೆ ಮಾಡಲಾಗುವುದು? | ನ್ಯಾಯಾಲಯ ಕಟ್ಟಡ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಕುರಿತು ಲೋಕೋಪಯೋಗಿ ಇಲಾಖೆಯಲ್ಲಿ ಕ್ರಮವಹಿಸಬೇಕಾಗಿರುವುದರಿಂದ ಪ್ರಸ್ತಾವನೆಯು ಸದರಿ ಇಲಾಖೆಯ ಪರಿಗಣನೆಯಲ್ಲಿದೆ. |

ಸಂಖ್ಯೆ: ಲಾ-ಎಲ್‌ಸಿಇ/174/2020

(ಜೆ.ಸಿ. ಮಾಧುಸ್ವಾಮಿ)
ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು

<u>ಕರ್ನಾಟಕ ಸರ್ಕಾರ</u>

ಸಂಖ್ಯೆ: ಜಸಂಇ 104 ಡಬ್ಲ್ಯೂಎಲ್‌ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:08.12.2020

07
Stard
08/12/2020
@:-10:00AM

ಇವರಿಂದ:

ಸರ್ಕಾರದ ಕಾರ್ಯದರ್ಶಿಗಳು,
ಜಲ ಸಂಪನ್ಮೂಲ ಇಲಾಖೆ,

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು-560001.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ (ರಾಯಭಾಗ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:65ಕ್ಕೆ ಉತ್ತರ ಒದಗಿಸುವ ಬಗ್ಗೆ.

ಉಲ್ಲೇಖ: ತಮ್ಮ ಪತ್ರ ಸಂಖ್ಯೆ :ಪ್ರಶಾವಿಸ:15ನೇವಿಸ:8ಅ:ಪ್ರ.ಸಂ.65:2020,ದಿನಾಂಕ:01.12.2020.

------

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ (ರಾಯಭಾಗ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 65ಕ್ಕೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿಗಳು (ತಾಂತ್ರಿಕ-4)(ಪ್ರ)
ಜಲಸಂಪನ್ಮೂಲ ಇಲಾಖೆ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 65
2. ಸದಸ್ಯರ ಹೆಸರು : ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ)
3. ಉತ್ತರಿಸಬೇಕಾದ ದಿನಾಂಕ : 08.12.2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೆಳಗಾವಿ ಜಿಲ್ಲೆ, ರಾಯಬಾಗ ಮತಕ್ಷೇತ್ರದ ವ್ಯಾಪ್ತಿಯ ಚಿಕ್ಕೋಡಿ ತಾಲ್ಲೂಕಿನ ಕರಗಾಂವ ಏತ ನೀರಾವರಿ ಯೋಜನೆಯ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಹೌದು |
| ಆ) | ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆಯು ಪ್ರಸ್ತುತ ಯಾವ ಹಂತದಲ್ಲಿದೆ; | ಸದರಿ ಯೋಜನೆಯ ಕುರಿತು ನೀರಿನ ಹಂಚಿಕೆ, ಲಭ್ಯತೆ, ಆರ್ಥಿಕ ಮತ್ತು ತಾಂತ್ರಿಕ ಸಾಧ್ಯ-ಸಾಧ್ಯತೆ ಬಗ್ಗೆ ನಿಗಮದ ಹಂತದಲ್ಲಿ ಪರಿಶೀಲನೆಯಲ್ಲಿದೆ. |
| ಇ) | ಸದರಿ ಪ್ರಸ್ತಾವನೆಗೆ ಮಂಜೂರಾತಿ ನೀಡಿ ಯಾವ ಕಾಲಮಿತಿಯಲ್ಲಿ ಕಾಮಗಾರಿಯನ್ನು ಪ್ರಾರಂಭಿಸಲಾಗುವುದು; | |
| ಈ) | ಈ ಕಾಮಗಾರಿಗಾಗಿ ತಗುಲಬಹುದಾದ ಅಂದಾಜು ಮೊತ್ತವೆಷ್ಟು; | |
| ಉ) | ಹಾಗಿಲ್ಲದ್ದಲ್ಲಿ, ಸದರಿ ಯೋಜನೆಯ ಪ್ರಸ್ತಾವನೆಯನ್ನು ಮುಂದಿನ ಆಯವ್ಯಯದಲ್ಲಿ ಸೇರ್ಪಡೆಗೊಳಿಸಿ ಅನುಷ್ಠಾನಗೊಳಿಸಿ ಸಾರ್ವಜನಿಕರಿಗೆ ಅನುಕೂಲ ಕಲ್ಪಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ; | |
| ಊ) | ಇಲ್ಲವಾದಲ್ಲಿ, ಕಾರಣಗಳೇನು? (ವಿವರ ನೀಡುವುದು) | |

**ಸಂಖ್ಯೆ: ಜಸಂಇ 104 ಡಬ್ಲ್ಯೂಎಲ್ಎ 2020**

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು
(ಬೃಹತ್ ಮತ್ತು ಮಧ್ಯಮ ನೀರಾವರಿ)



**ಕರ್ನಾಟಕ ಸರ್ಕಾರ**

**ಸಂ:** ನಅಇ 256 ಪಿಆರ್‌ಜೆ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ
ಬೆಂಗಳೂರು, ದಿನಾಂಕ:-07-12-2020

8/12/2020

**ಇಂದ:**

ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನ ಸಭೆಯ ಸದಸ್ಯರಾದ **ಶ್ರೀ ಮುನಿರತ್ನ (ರಾಜರಾಜೇಶ್ವರಿ ನಗರ)** ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 332 ಕ್ಕೆ ಉತ್ತರಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಸದಸ್ಯರಾದ **ಶ್ರೀ ಮುನಿರತ್ನ (ರಾಜರಾಜೇಶ್ವರಿ ನಗರ)** ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 332 ರ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

K. Nagesh 7/12/2020
**(ಕೆ.ನಾಗೇಶ್)**
ಸರ್ಕಾರದ ಅಧೀನ ಕಾರ್ಯದರ್ಶಿಗಳು (ಪಿ.ಎಂ.ಸಿ)(ಪರವಾಗಿ),
ನಗರಾಭಿವೃದ್ಧಿ ಇಲಾಖೆ.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 332
2. ಸದಸ್ಯರ ಹೆಸರು : ಶ್ರೀ ಮುನಿರತ್ನ (ರಾಜರಾಜೇಶ್ವರಿನಗರ)
3. ಉತ್ತರಿಸಬೇಕಾದ ದಿನಾಂಕ : 08-12-2020
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ನಾಯಂಡಹಳ್ಳಿ ಜಂಕ್ಷನ್‌ನಿಂದ ನಾಗರಭಾವಿ ಹೊರವರ್ತುಲ ರಸ್ತೆ ಮಾರ್ಗವಾಗಿ, ಡಾ: ರಾಜ್‌ಕುಮಾರ್ ಸಮಾಧಿ, ಗೊರಗುಂಟೆಪಾಳ್ಯ ಜಂಕ್ಷನ್ ಮೂಲಕ ಹೆಬ್ಬಾಳದವರೆಗೆ ಮೆಟ್ರೋ ರೈಲು ಯೋಜನೆ ಪ್ರಾರಂಭಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು.<br>2020-21ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಈ ಕೆಳಗಿನ ಪ್ರಸ್ತಾವನೆಯನ್ನು ಒಳಗೊಂಡಿದೆ.<br>"ಹೊರವರ್ತುಲ ರಸ್ತೆ – ಪಶ್ಚಿಮ ಮೆಟ್ರೋ, ಹೆಬ್ಬಾಳದಿಂದ ಜೆ.ಪಿ. ನಗರ ಮತ್ತು ಮಾಗಡಿ ರಸ್ತೆಯ ಮೆಟ್ರೋ ಲೈಟ್ ಹಳಿಗಳನ್ನು ವಿಸ್ತೃತಾ ಯೋಜನಾ ವರದಿಯನ್ನು ಸಿದ್ಧಪಡಿಸುವುದು, ಒಟ್ಟು 44 ಕಿ.ಮೀ ಉದ್ದದ ಮೆಟ್ರೋ ಹಳಿಗಳನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದ (ಪಿಪಿಪಿ) ಮೂಲಕ ಕಾರ್ಯಗತಗೊಳಿಸಲು ಪ್ರಸ್ತಾಪಿಸಲಾಗಿದೆ". |
| ಆ) | ಹಾಗಿದ್ದಲ್ಲಿ, ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು (ಸಂಪೂರ್ಣ ವಿವರ ನೀಡುವುದು)? | ಸಾರ್ವಜನಿಕ ಖಾಸಗಿ ಸಹಭಾಗಿತ್ವ (ಪಿಪಿಪಿ) ಮಾದರಿಯ ಅನುಷ್ಠಾನಕ್ಕಾಗಿ ವಿಸ್ತೃತಾ ಯೋಜನಾ ವರದಿ (ಡಿಪಿಆರ್) ತಯಾರಿಸಲು ದಿನಾಂಕ:19-05-2020 ರಂದು ಮೆ\|\|ರೈಟ್ಸ್ ಸಂಸ್ಥೆಗೆ ವಹಿಸಲಾಗಿದೆ. |

ನಅಇ 256 ಪಿ.ಆರ್.ಜೆ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿಗಳು

